# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 400 |
| ಸದಸ್ಯರ ಹೆಸರು | : | ಡಾ.ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ: | : | 15.12.2021 |
| ಉತ್ತರಿಸುವ ಸಚಿವರು | | ಮಾನ್ಯ ಪಶುಸಂಗೋಪನಾ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಗೋವುಗಳು ಜಾನುವಾರುಗಳು, ಕುರಿಗಳು ಹಾಗೂ ಇತರೆ ಮತ್ತು ಇರುವ ಗೋಮಾಳಗಳ ಹುಲ್ಲುಗಾವಲುಗಳ ಅನುಪಾತ ಸರಿ ಇದೆಯೇ: | ಹೆಚ್ಚಿನ ಜಿಲ್ಲೆಗಳಲ್ಲಿ ಅನುಪಾತ ಸರಿ ಇರುವುದಿಲ್ಲ |
| ಆ) | ಮಲೆನಾಡು ಪ್ರದೇಶಗಳಲ್ಲಿ ನೂರಾರು ಗೋವುಗಳು ನೈಸರ್ಗಿಕವಾಗಿ ಮೇಯುವಂತೆ ಮಾದರಿ 'ಗೋಕುಲ ಧಾಮ' (ಗೋಶಾಲೆ) ನಿರ್ಮಾಣ ಯೋಚನೆ ಸರ್ಕಾರದ ಮುಂದಿದೆಯೇ: ಇದಕ್ಕಾಗಿ ಎಷ್ಟು ಗೋ ಆಕ್ರಮ ಮಾಡಲಾಗುತ್ತಿದೆ: ಮೀಸಲಿಡಲಾದ ಹಣವೆಷ್ಟು: | ಜಿಲ್ಲೆಗೊಂದು ಸರ್ಕಾರಿ ಗೋಶಾಲೆ ಪ್ರಾರಂಭಿಸುವ ಯೋಜನೆಯಂತೆ 30 ಜಿಲ್ಲೆಗಳಲ್ಲಿ ಸರ್ಕಾರಿ ಗೋಶಾಲೆ ಸ್ಥಾಪನೆಗಾಗಿ ಪ್ರತಿ ಜಿಲ್ಲೆಗೆ ರೂ.36.00 ಲಕ್ಷದಂತೆ ಒಟ್ಟು ರೂ.1080.00 ಲಕ್ಷಗಳ ಅನುದಾನ ಬಿಡುಗಡೆ ಮಾಡಿದೆ. ಗೋಶಾಲೆ ಸ್ಥಾಪನೆಗಾಗಿ ಪ್ರಾರಂಭಿಸಲು ಸ್ಥಳಗಳ ಆಯ್ಕೆ ಇನ್ನಿತರೆ ವಿವರಗಳನ್ನು **ಅನುಬಂಧ-1 ಮತ್ತು ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ) | ಮಲೆನಾಡಿನ ಅರೆಕಾಡು, ಗೋಮಾಳಗಳಲ್ಲಿ ಲಂಟಾನ ಹಾಗೂ ಇತರೆ ಕಳೆ ಸಸ್ಯಗಳು ವ್ಯಾಪಕವಾಗಿ ಬೆಳೆದು ಆಹಾರ (ಹುಲ್ಲು) ಕೊರತೆಯಿಂದ ಗೋವುಗಳು ರಸ್ತೆ ಬದಿ ಹುಲ್ಲು ಮೇಯವಾಗಿ ಅಪಘಾತವಾಗುತ್ತಿರುವುದು ಸರ್ಕಾರ ಗಮನಕ್ಕೆ ಬಂದಿದೆಯೇ: ಸಂಖ್ಯೆ ಹಾಗೂ ಪರಿಹಾರದ ವಿವರವನ್ನು ನೀಡುವುದು: | ಜಾನುವಾರುಗಳು ಅಪಘಾತದಿಂದ ಮೃತಪಟ್ಟ ಬಗ್ಗೆ ಈವರೆವಿಗೆ ಯಾವುದೇ ಪ್ರಕರಣಗಳು ವರದಿಯಾಗಿರುವುದಿಲ್ಲ. |
| ಈ) | ಕರ್ನಾಟಕದ ದೇಶೀಯ ತಳಿಗಳ ರಕ್ಷಣೆ ಹಾಗೂ ಘೋಷಣೆ ಹೇಗೆ ನಡೆದಿದೆ: ರೋಗದಿಂದ ರಕ್ಷಿಸಲು ಕೈಗೊಂಡಿರುವ ಕ್ರಮಗಳೇನು: ಇರುವ ಅನುದಾನ ಸಾಕಾಗುತ್ತಿದೆಯೇ: ಪಶುಸಂಗೋಪನೆ ಇಲಾಖೆಗೆ ಇನ್ನು ಹೆಚ್ಚಿನ ಅನುದಾನ ಅವಶ್ಯವಿದೆಯೇ? (ವಿವರ ನೀಡುವುದು) | 1) ತುಮಕೂರು ಜಿಲ್ಲೆಯ ಕುಣಿಕೇನಹಳ್ಳಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕೊಯ್ಲಾ ಮತ್ತು ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿಯಲ್ಲಿ ಎನ್ .ಎ.ಎಫ್.ಸಿ.ಸಿ ಯೋಜನೆಯಡಿ ಉತ್ತಮ ತಳಿಯ ಹಳ್ಳಿಕಾರ್ / ಮಲೆನಾಡ್ ಗಿಡ್ಡ/ ಅಮೃತ್ ಮಹಲ್ ರಾಸುಗಳನ್ನು ರೈತರಿಂದ ಖರೀದಿಸಿ, ಉತ್ತಮ ತಳಿಯ ಬೀಜದ ಹೋರಿಗಳನ್ನು ಉತ್ಪಾದಿಸಲಾಗುತ್ತಿದೆ.<br>2) ಅಮೃತ್ ಮಹಲ್ ರಾಸುಗಳನ್ನು 12 ಕೇಂದ್ರಗಳಲ್ಲಿ, ಹಳ್ಳಿಕಾರ್ ತಳಿ, ಮಲೆನಾಡ್ ಗಿಡ್ಡ, ಖಿಲಾರಿ ಹಾಗೂ ಕೃಷ್ಣವ್ಯಾಲಿ ತಳಿಗಳನ್ನು ತಲಾ ಒಂದು ಕೇಂದ್ರಗಳಲ್ಲಿ ಸಂರಕ್ಷಣೆ ಮಾಡಿ ಪೋಷಿಸಲಾಗುತ್ತಿದೆ. |

| | | |
|---|---|---|
| | | 3) ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಸಂಸ್ಥೆಗಳ ಮೂಲಕ ರೈತರ ಬೇಡಿಕೆಗೆ ಅನುಸಾರ ದೇಶಿ ತಳಿಗಳ ಹೋರಿಗಳ ವೀರ್ಯನಳಿಕೆಗಳನ್ನು ಬಳಸಿ ಕೃತಕ ಗರ್ಭಧಾರಣೆ ಮಾಡಲಾಗುತ್ತಿದ್ದು ತಳಿ ಸಂವರ್ಧನೆ ಕಾರ್ಯ ಕೈಗೊಳ್ಳಲಾಗುತ್ತಿದೆ.<br><br>ರಾಜ್ಯದಲ್ಲಿ ದೇಶಿ ತಳಿಗಳ ಸಂರಕ್ಷಣೆಗಾಗಿ ಇಲಾಖೆಯ ಕ್ಷೇತ್ರದ ಸಾಮ್ಯರ್ಥ್ಯಕ್ಕಿಂತ ಹೆಚ್ಚಾಗಿರುವ ಗಂಡು ಮತ್ತು ಹೆಣ್ಣು ಕರುಗಳನ್ನು ಅಮೃತ ಧಾರೆ ಮತ್ತು ಅಮೃತ ಸಿರಿ ಯೋಜನೆಯ ಮಾರ್ಗಸೂಚಿಯಂತೆ ಮಾನ್ಯ ಶಾಸಕರ ಅಧ್ಯಕ್ಷತೆಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ದೆಶಿ ರಾಸುಗಳನ್ನು ನೀಡುವ ಮೂಲಕ ದೇಶಿ ತಳಿ ಸಂರಕ್ಷಣಾ ಕಾರ್ಯ ಜಾರಿಯಲ್ಲಿದೆ.<br><br>ದೇಶಿ ತಳಿಯ ರಾಸುಗಳನ್ನು ಕಾಲು ಬಾಯಿ ರೋಗ, ಹೆಚ್.ಎಸ್. ರೋಗ, ಚಪ್ಪೆ ರೋಗ ಮತ್ತು ಚರ್ಮ ಗಂಟು ರೋಗ, ನೆರಡಿ ರೋಗ (ರೋಗದ ಲಕ್ಷಣ ಕಂಡು ಬಂದು ರೋಗ ಧೃಡಪಟ್ಟರೆ) ರೋಗಗಳಿಂದ ರಕ್ಷಿಸಲು ಲಸಿಕಾ ಕಾರ್ಯಕ್ರಮಗಳನ್ನು ನಿಯಮಿತವಾಗಿ ವೇಳಾಪಟ್ಟಿ ಪ್ರಕಾರ ಕೈಗೊಳ್ಳಲಾಗುತ್ತಿದೆ.<br><br>ಇಲಾಖೆಗೆ ಹೆಚ್ಚುವರಿ ಅನುದಾನದ ಅವಶ್ಯಕತೆ ಇದ್ದು, ವಿವರವನ್ನು ಅನುಬಂಧ-3 ರಲ್ಲಿ ನೀಡಲಾಗಿದೆ. |

**ಸಂ: ಪಸಂಮೀ ಇ-311 ಸಲೆವಿ 2021**

(ಪ್ರಭು. ಬಿ ಚವ್ಹಾಣ್)

**ಪಶುಸಂಗೋಪನೆ ಸಚಿವರು**

## ಅನುಬಂಧ-II

## ಸರ್ಕಾರಿ ಗೋಶಾಲೆ ನಿರ್ಮಿಸಲು 11 ಜಿಲ್ಲೆಗಳಲ್ಲಿ ಜಮೀನು ಗುರುತಿಸುವ ಪ್ರಕ್ರಿಯೆಯ ವಿವರಗಳು

| ಕ್ರ. ಸಂ | ಜಿಲ್ಲೆಗಳು | ಸರ್ಕಾರಿ ಗೋಶಾಲೆ ಜಮೀನಿನ ವಿವರ | ಎಕರೆ | ಷರಾ |
|---|---|---|---|---|
| 1. | ಶಿವಮೊಗ್ಗ | ನಗರಸಭೆ ವ್ಯಾಪ್ತಿಯ ರಾಗಿಗುಡ್ಡ, ಕಸಬಾ ಹೋಬಳಿ ಸ.ನ.76 ರಲ್ಲಿ 5.00ಎಕರೆ | **5.00** | ಜಮೀನಿನ ಮಂಜೂರಾತಿಯ ಕಡತ AC ಕಛೇರಿಯಲ್ಲಿರುತ್ತದೆ. |
| 2. | ಮಂಡ್ಯ | ಮದ್ದೂರು ತಾಲ್ಲೂಕು ಚಿಕ್ಕ ಅಂಕನಹಳ್ಳಿಗ್ರಾಮ ಸ.ನ.804/6ರಲ್ಲಿ 10.00 ಎಕರೆ | **10.00** | ಕಡತ ತಹಶೀಲ್ದಾರ್ ಮದ್ದೂರು ತಾಲ್ಲೂಕು ರವರ ಕಛೇರಿಯಲ್ಲಿರುತ್ತದೆ. |
| 3. | ಉಡುಪಿ | ಹೆಬ್ರಿತಾಲ್ಲೂಕು, ಕೆರೆಬೆಟ್ಟುಗ್ರಾಮ, ಸ.ನ.79/2 ರಲ್ಲಿ 13.24 ಎಕರೆ | **13.24** | ಕಡತ ಕಂದಾಯ ಇಲಾಖೆಯಲ್ಲಿದೆ. |
| 4 | ಕೊಡಗು | ಮಡಿಕೇರಿತಾಲ್ಲೂಕು, ನಿಡುಗಣೆಗ್ರಾಮ, ಸ.ನ.22/1 ರಲ್ಲಿ20.84 ಎಕರೆ | **20.84** | ಜಮೀನಿನ ಮಂಜೂರಾತಿಗಾಗಿ ಕಡತ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿರುತ್ತದೆ. ಸ್ಥಳಪರಿಶೀಲನೆ ಮಾಡುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| 5 | ಬೆಳಗಾವಿ | ಹುಕ್ಕೇರಿ ತಾಲ್ಲೂಕು ಬೆಳವಿಗ್ರಾಮ, ಸ.ನ.645 ರಲ್ಲಿ 19.04 ಎಕರೆ | **19.04** | ಜಿಲ್ಲಾಧಿಕಾರಿಗಳು ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ ಇವರಿಗೆ ಭೂಮಿ ಮಂಜೂರಾತಿಗಾಗಿ ದಿ:08-11-21ರಂದು ಪತ್ರ ಸಲ್ಲಿಸಿರುತ್ತಾರೆ. |
| 6. | ಉತ್ತರ ಕನ್ನಡ | ದುಸಗಿಗ್ರಾಮ, ಹಳಿಯಾಳ ತಾಲ್ಲೂಕು ಸ.ನ.173 ರಲ್ಲಿ 20.00ಎಕರೆ | **20.00** | ಜಿಲ್ಲಾಧಿಕಾರಿಗಳ ತಂಡ ಮೂಲಭೂತ ಕೆಲಸಗಳ ನಿರ್ಮಾಣಕ್ಕೆ ಭೂಮಿ ವೀಕ್ಷಣೆ ಮಾಡಿರುತ್ತಾರೆ ಮತ್ತು ಕಡತ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಇರುತ್ತದೆ. |
| 7. | ಧಾರವಾಡ | ಮದನಬಾವಿಗ್ರಾಮ, ತೇಗೂರುಹತ್ತಿರ, ಸ.ನ.214 ರಲ್ಲಿ 10.00 ಎಕರೆ. | **10.00** | ದಿ:16-11-21 ರಂದು ಜಿಲ್ಲಾಧಿಕಾರಿಗಳ ತಂಡ ಸ್ಥಳ ಪರಿಶೀಲನೆ ಮಾಡಿ, ಮೂಲಭೂತ ಕಾರ್ಯಗಳನ್ನು ಪ್ರಾರಂಭ ಮಾಡಲು ಸೂಚಿಸಿರುತ್ತಾರೆ. |
| 8. | ವಿಜಯಪುರ | ವಿಜಯಪುರ ತಾಲ್ಲೂಕು, ಭೂತನಾಳ ಗ್ರಾಮ, ಸ.ನ.217 ರಲ್ಲಿ 10.26 ಎಕರೆ | **10.26** | ಜಮೀನು ಹಸ್ತಾಂತರಿಸುವ ಪ್ರಕ್ರಿಯೆ ಕುರಿತಂತೆ ಜಿಲ್ಲಾಧಿಕಾರಿಗಳು ಪೂರ್ವಾನು ಮೋದನೆಗಾಗಿ ಪ್ರದಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ ಇವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆಯುಕ್ತರು, ನಗರಸಭೆ ರವರ ತಂಡ ಮೂಲಭೂತ ಕಾರ್ಯಗಳ ಕುರಿತು ವೀಕ್ಷಿಸಿದ್ದಾರೆ. |
| 9. | ಕಲಬುರಗಿ | ಕಲಬುರಗಿ ತಾಲ್ಲೂಕು, ಮಿಣಜಿಗಿ ಗ್ರಾಮ ಸ.ನ.23 ರಲ್ಲಿ 56 ಎಕರೆಯಲ್ಲಿ (25 ಎಕರೆ ) | **25.00** | ಕಡತ ತಹಶೀಲ್ದಾರ್, ಕಲಬುರಗಿರವರ ಕಛೇರಿಯಲ್ಲಿರುತ್ತದೆ. |
| 10. | ಯಾದಗಿರಿ | ಬೇಣಚಿಗಡ್ಡಿಗ್ರಾಮ, ಹುಣಸಗಿ ತಾಲ್ಲೂಕುಸ.ನ.28 ರಲ್ಲಿ 10.00 ಎಕರೆ. | **10.00** | ಕಡತವು ಜಿಲ್ಲಾಧಿಕಾರಿಗಳ ಕಛೇರಿಯ ಹಂತದಲ್ಲಿರುತ್ತದೆ. |
| 11. | ಕೋಲಾರ | ಗುಟ್ಟಹಳ್ಳಿ / ಬಂಗಾರ ತಿರುಪತಿಗ್ರಾಮ, ಕೆ.ಜಿ.ಎಫ್. ತಾಲ್ಲೂಕು .ಸ.ನ.59 ರಲ್ಲಿ 19.60 ಎಕರೆ | **19.60** | ಜಮೀನು ಹಸ್ತಾಂತರಿಸುವ ಪ್ರಕ್ರಿಯೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಅಂತಿಮ ಹಂತದಲ್ಲಿರುತ್ತದೆ. |

ಅನುಬಂಧ-I

## ಸರ್ಕಾರಿ ಗೋಶಾಲೆ ನಿರ್ಮಿಸಲು 19 ಜಿಲ್ಲೆಗಳಲ್ಲಿ ಜಮೀನು ಪಡೆದಿರುವ ವಿವರಗಳು

| ಕ್ರ ಸಂ | ಜಿಲ್ಲೆಗಳು | ಸರ್ಕಾರಿಗೋಶಾಲೆಜಮೀನಿನವಿವರ | ಎಕರೆ |
|---|---|---|---|
| 1 | ಬೆಂಗಳೂರು ನಗರ | ಹೆಸರಘಟ್ಟದ ಹೋಬಳಿ, ದಾಸೇನಹಳ್ಳಿ, ಸರ್ವೆ.ನ.36 ರಲ್ಲಿ ಲಭ್ಯವಿರುವ 50 ಎಕರೆಜ ಮೀನಲ್ಲಿ 25 ಎಕರೆ ಹಂಚಿಕೆ ಮಾಡಲಾಗಿದೆ. | 25.00 |
| 2 | ಬೆಂಗಳೂರು ಗ್ರಾಮಾಂತರ | ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ, ಕೊಡಿಗೇಹಳ್ಳಿ,10 ಎಕರೆ ಸರ್ಕಾರಿ ಜಮೀನನ್ನು ಹಂಚಿಕೆ ಮಾಡಲಾಗಿದೆ. | 10.00 |
| 3 | ತುಮಕೂರು | ಶಿರಾ ತಾಲ್ಲೂಕಿನಲ್ಲಿ ಹುಲಕುಂಟೆ ಹೋಬಳಿ, ಚಿಕ್ಕಬಾಣಗೇರೆ ಗ್ರಾಮದ ಸ.ನ.204 ರಲ್ಲಿ 9.2 ಎಕರೆ ಸರ್ಕಾರಿ ಜಮೀನನ್ನು ಹಂಚಿಕೆ ಮಾಡಲಾಗಿದೆ. RTC ಪಡೆಯಲಾಗಿದೆ. | 9.20 |
| 4 | ಚಿಕ್ಕಬಳ್ಳಾಪುರ | ನಾಗಿರೆಡ್ಡಿಹಳ್ಳಿ, ಭುಶಟ್ಟಹಳ್ಳಿ, ಹೋಬಳಿ, ಶಿಡ್ಲಘಟ್ಟ ತಾಲುಕು .ಸ.ನ.41 ರಲ್ಲಿ 9.38 ಎಕರೆ. | 9.38 |
| 5. | ಹಾಸನ | ಅರಸೀಕೆರೆ ತಾಲುಕು ಹಬ್ಬನಗಟ್ಟ ಕಾವಲು, ಬೋರನ ಕೊಪ್ಪಲು, ಸ.ನ.2/70 ರಲ್ಲಿ 20-25 ಎಕರೆ. | 25.00 |
| 6. | ಬಾಗಲಕೋಟೆ | ಬಾಗಲಕೋಟೆ ತಾಲುಕು ಶೀಗಿಕೇರಿ ಗ್ರಾಮ, ಸ.ನ.100/100/2ರ ಕ್ಷೇತ್ರದ 12.30 ಎಕರೆಯಲ್ಲಿ 9.20. | 9.20 |
| 7. | ಮೈಸೂರು | ವರುಣ ಹೋಬಳಿ, ಆಯರಹಳ್ಳಿ, ಮೈಸೂರು ಸ.ನ.212 ರಲ್ಲಿ 10ಎಕರೆ. | 10.00 |
| 8. | ಚಿಕ್ಕಮಗಳೂರು | ಕಡೂರು ತಾಲುಕು, ಎಮ್ಮೆದೊಡ್ಡಿ ಭಾಗದಲ್ಲಿ ಇಲಾಖೆಯ ಅಧೀನದಲ್ಲಿರುವ ಗೋಸದನದ ಜಾಗ ಸ.ನ.70 ರಲ್ಲಿ 11ಎಕರೆ. | 11.00 |
| 9. | ದಕ್ಷಿಣ ಕನ್ನಡ | ಕಡಬ ತಾಲುಕು, ರಾಮಕುಂಜಗ್ರಾಮ, ಜಾನುವಾರು ಸಂವರ್ದನಾ ಮತ್ತು ತರಬೇತಿ ಕೇಂದ್ರ, ಕೊಯ್ಲ ಕ್ಷೇತ್ರ ಸ.ನ.233,299/1,2,3 ಒಟ್ಟು 98.45 ಎಕರೆ | 98.45 |
| 10 | ರಾಯಚೂರು | ರಾಯಚೂರು ತಾಲುಕು ಯರಗೇರಾ ಹೋಬಳಿ, ಜಂಬಲದಿನ್ನಿ ಗ್ರಾಮ, ಸ.ನ. 138/ಎ, ರಲ್ಲಿ 6.00 ಎಕರೆ. | 6.00 |
| 11. | ಹಾವೇರಿ | ಗುತ್ತಲ ಕುರಿಸಂವರ್ದನಾ ಕೇಂದ್ರದ ಸ.ನ. 371 -374 ರಲ್ಲಿ 25 ಎಕರೆ | 25.00 |
| 12. | ಗದಗ | ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ ವಿಶ್ವವಿದ್ಯಾಲಯದ ಆವರಣದಲ್ಲಿ ಪಿಪಿಪಿ ಮಾದರಿಯಲ್ಲಿ ಹಟ್ಟಿಗ್ರಾಮ, ಸ.ನ.179 10 ಎಕರೆ. | 10.00 |
| 13. | ಬಳ್ಳಾರಿ | ವಿಜಯನಗರ ಜಿಲ್ಲೆ ಹಗರಿಬೊಮ್ಮನಹಳ್ಳಿ, ತಾಲುಕು, ವರ್ಲಹಳ್ಳಿಗ್ರಾಮ ದಸ.ನ. 39 ರಲ್ಲಿ 10.52 ಎಕರೆ ಪೈಕಿ9.88 ಎಕರೆ | 9.88 |
| 14. | ಕೊಪ್ಪಳ | ಯಲಭುರ್ಗಾ ತಾಲುಕು, ಭೇವೂರಗ್ರಾಮ, ಗಾಯರಾಣ ಸ.ನ.151 ರಲ್ಲಿ 10.00 ಎಕರೆ | 10.00 |
| 15. | ದಾವಣಗೆರೆ | ಹೊಸಹಳ್ಳಿಗ್ರಾಮ, ಆನೆಗೋಡು ಹೋಬಳಿ, ದಾವಣಗೆರೆ ತಾಲ್ಲೂಕು. ಸ.ನ.35 ರಲ್ಲಿ 7.00ಎಕರೆ | 7.00 |
| 16. | ಚಾಮರಾಜನಗರ | ಬೆಮಹಳ್ಳಿ, ಚಾಮರಾಜನಗರ ತಾಲ್ಲೂಕು 9.00 ಎಕರೆ | 9.00 |
| 17 | ಚಿತ್ರದುರ್ಗ | ಕುರಡಿಹಳ್ಳಿಗ್ರಾಮ, ಕಸಬಾಹೋಬಳಿ, ಚೆಳ್ಳಕೆರೆ ತಾಲ್ಲೂಕು, ಸ.ನ.27 ರಲ್ಲಿ 9.36 ಎಕರೆ | 9.36 |
| 18. | ಬೀದರ್ | ಬಸಂತಪೂರ ಗ್ರಾಮದ ಸರ್ಕಾರಿ ಗಾಯರಾಣ ಭೂಮಿ ಸ,ನ.93 ರಲ್ಲಿ 39.08 ಎಕರೆ | 39.08 (ಅಧೀನ ಕಾರ್ಯದರ್ಶಿಗಳು ಕಂದಾಯ ಇಲಾಖೆ, ಭೂ ಮಂಜುರಾತಿ-3, ಇವರಿಂದ ಪೂರ್ವಾನುಮೋದನೆ ನೀಡಿದ್ದಾರೆ.) |
| 19. | ರಾಮನಗರ | ವಂದಾರಗುಪ್ಪೆಗ್ರಾಮ, ಚೆನ್ನಪಟ್ಟಣ ತಾಲ್ಲೂಕು.ಸ.ನ.20 ರಲ್ಲಿ 8.00ಎಕರೆ ಜಮೀನು | ಜಿಲ್ಲಾಧಿಕಾರಿಗಳು 8.00 ಎಕರೆ ಜಮೀನನ್ನು ಗೋಶಾಲೆಗಾಗಿ ಕಾಯ್ದಿರಿಸಲು ಆದೇಶ ನೀಡಿರುತ್ತಾರೆ. |

# ಅನುಬಂಧ-3

(ರೂ. ಕೋಟಿಗಳಲ್ಲಿ)

| ಕ್ರಮ ಸಂಖ್ಯೆ | ಕಾರ್ಯಕ್ರಮದ ವಿವರ | ಹೆಚ್ಚುವರಿಯಾಗಿ ಬೇಕಾಗುವ ಅನುದಾನ |
|---|---|---|
| 1 | ಇಲಾಖಾ ಕ್ಷೇತ್ರಗಳ ಬಲವರ್ಧನೆಗಾಗಿ | 150.00 |
| 2 | ಜಾನುವಾರುಗಳ ಚಿಕಿತ್ಸೆಗೆ ಬೇಕಾಗುವ ಔಷಧಿಗಳು ಮತ್ತು ರಾಸಾಯನಿಕಗಳು | 125.00 |
| 3 | ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ | 10.00 |
| 4 | ಮೇವು ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ | 100.00 |
| 5 | ಪ್ರಾಣಿ ಕಲ್ಯಾಣ ಕಾರ್ಯಕ್ರಮಗಳು ಮತ್ತು ಗೋಶಾಲೆಗಳಿಗೆ ಬೆಂಬಲ ಪ್ರೋತ್ಸಾಹ ಧನ | 175.00 |
| | **ಒಟ್ಟು** | **560.00** |